# ವಾಲ್ಮೀಕಿಯ ಭಾಗ್ಯ

ಕೆ. ವಿ. ಪುಟ್ಟಪ್ಪ

ಶಿವಮೊಗ್ಗ
ಕಾವ್ಯಾಲಯ
೧೯೩೭

# ವಿಜ್ಞಾಪನೆ

ಶ್ರೀ ರಾಮಚಂದ್ರನ ಪಿಸುಣ್ಕೆ ಕಿವಿಗೊಟ್ಟ ಕಟ್ಟಾಜ್ಞತಿಯಂತೆ ಸೌಮಿತ್ರಿ ಗರ್ಭಿಣಿಯಾಗಿದ್ದ ಸೀತಾ ಮಾತೆಯನ್ನು ಅರಣ್ಯದಲ್ಲಿ ಬಿಟ್ಟುಹೋಗುವ ಹೃದಯ ವಿದ್ರಾವಕವಾದ ಸನ್ನಿವೇಶವನ್ನು ಚಿತ್ರಿಸುವ ಪ್ರಯತ್ನ ಈ 'ದೃಶ್ಯ'ದಲ್ಲಿ ನಡೆದಿದೆ. ಲಕ್ಷ್ಮೀಶನು ಪದ್ಯದಲ್ಲಿಯೂ, ಮುದ್ದಣನು ಗದ್ಯದಲ್ಲಿಯೂ ಈ ಸನ್ನಿವೇಶವನ್ನೇ ಎಷ್ಟು ಸರಸ ಪ್ರೌಢವಾಗಿ ಬರೆದಿದ್ದಾರೆ ಎಂಬುದು ಪ್ರಸಿದ್ಧವಾಗಿದೆ. ಆ ಕವಿಗಳ ಸರಸ ಪ್ರೌಢಿಮೆ ಅನನುಕರಣೀಯವಾದುದಾದರೂ ಅವರನ್ನು ಆಶ್ರಯಿಸಿ ಅನುಸರಿಸಿಯೇ ಈ ದೃಶ್ಯ ರಚಿತವಾಗಿದೆ. ಕೆಲವೆಡೆಗಳಲ್ಲಿ ಆ ಕವಿಗಳ ಮಾತುಗಳು ಹಾಗೆ ಹಾಗೆಯೇ ಪಾತ್ರಗಳ ಬಾಯಿಂದ ಹೊರಹೊಮ್ಮುವುದನ್ನು ಓದುಗರು ಕಾಣಬಹುದು.

ಹಿಂದಿನ ಆ ಕವಿವರ್ಯರು ಶ್ರೀ ರಾಮನು ಸೀತೆಯನ್ನು ತೊರೆದುದಕ್ಕೆ ಹಲವು ಕಾರಣಗಳನ್ನು ಹೇಳಿದ್ದಾರೆ: ಲೋಕಾಪವಾದದ ನಿವಾರಣೆ, ರಘುಕುಲದ ಕೀರ್ತಿ ಸಂರಕ್ಷಣೆ, ಶ್ರೀ ರಾಮನ ಸ್ವಕೀರ್ತಿ ಪಾಲನೆ, ಮೊದಲಾದುವು. ಆ ಕಾರಣಗಳಲ್ಲಿ ಕೆಲವು ಕುಂಟು; ಮತ್ತೆ ಕೆಲವು ಕುರುಡು ಎಂಬುದು ಆ ಕಾವ್ಯಗಳಲ್ಲಿಯೇ ರಾಘವಾನುಜರು ಆಡುವ ಪ್ರತಿವಾದದಿಂದ ತಿಳಿದುಬರುತ್ತದೆ. ಈ 'ದೃಶ್ಯ'ದಲ್ಲಿ ವಾಲ್ಮೀಕಿಯ ಭಾಗ್ಯವನ್ನು ಕಾರಣವಾಗಿ ಇಟ್ಟುಕೊಂಡಿದೆ. ಅದರಿಂದಲೇ 'ದೃಶ್ಯ'ಕ್ಕೆ ಆ ಹೆಸರನ್ನೇ ಕೊಟ್ಟಿದೆ. ಈ ಕಾರಣವನ್ನು ಹೇಳಿದುದರಿಂದ ಸೀತಾ ಪರಿತ್ಯಾಗದ ಸಮಸ್ಯೆ ಪರಿಹಾರವಾಗದಿದ್ದರೂ ಅದು ಭಾವಪೂರ್ಣವಾಗುವುದೆಂದು ಬರೆದವನ ಆಶಯ.

ಈ 'ದೃಶ್ಯ'ದ ಭಾಷೆ ಸಂಪೂರ್ಣವಾಗಿ ಗದ್ಯವೆಂದೇ ತಿಳಿಯಬೇಕು. ಅಭಿನಯಕಾರರಿಗಾಗಿಯೂ ನಾಟಕೀಯವಾಗಿ ಓದುವವರಿಗಾಗಿಯೂ ಪಂಕ್ತಿಗಳನ್ನು ವಿಭಾಗಮಾಡಿದೆ.

**ಕೆ. ವಿ. ಪುಟ್ಟಪ್ಪ**

[ಈ ಗ್ರಂಥವನ್ನು ಶೀಘ್ರವಾಗಿಯೂ ಅಂದವಾಗಿಯೂ ಮುದ್ರಿಸಿಕೊಟ್ಟ ಬೆಂಗಳೂರು ಪ್ರೆಸ್ಸಿನವರಿಗೆ ನಾವು ಕೃತಜ್ಞರು. —ಪ್ರಕಾಶಕರು]

# ಕೆ. ವಿ. ಪುಟ್ಟಪ್ಪನವರ ಕೃತಿಗಳು

ಕಿಂದರಿಜೋಗಿ, ಇತರ ಕಥನ ಕವನಗಳು

ಬೊಮ್ಮನಹಳ್ಳಿಯ ಕಿಂದರಿಜೋಗಿ

ಯಮನ ಸೋಲು

ನನ್ನ ಗೋಪಾಲ

ಶ್ಮಶಾನ ಕುರುಕ್ಷೇತ್ರಂ

ವಾಲ್ಮೀಕಿಯ ಭಾಗ್ಯ

ಮಹಾರಾತ್ರಿ

ಜಲಗಾರ

ಬಿರುಗಾಳಿ

ರಕ್ತಾಕ್ಷಿ

ವೇದಾಂತ

ಹಾಳೂರು

ಶ್ರೀ ರಾಮಕೃಷ್ಣ ಪರಮಹಂಸ

ಸ್ವಾಮಿ ವಿವೇಕಾನಂದ

ಮಲೆನಾಡು ಚಿತ್ರಗಳು

ಚಿತ್ರಾಂಗದಾ

ಪಾಂಚಜನ್ಯ

ನವಿಲು – ೧

ನವಿಲು – ೨

ಕೊಳಲು

ವಿವೇಕವಾಣಿ

ಸಾಹಿತ್ಯ ಪ್ರಚಾರ

ಕಾವ್ಯದ ಕಣ್ಣು ಕವಿಯ ದರ್ಶನದಲ್ಲಿ

ಸಂನ್ಯಾಸಿ ಮತ್ತು ಇತರ ಕಥೆಗಳು

ಕಾನೂರು ಸುಬ್ಬಮ್ಮ ಹೆಗ್ಗಡಿತಿ

ಮಲೆನಾಡು ಒಕ್ಕಲಿಗರಲ್ಲಿ

ಈ ಪುಸ್ತಕಗಳು ದೊರೆಯುವ ಸ್ಥಳ:

**ಕಾವ್ಯಾಲಯ * ಶಿವಮೊಗ್ಗ**

# ವಾಲ್ಮೀಕಿಯ ಭಾಗ್ಯ

[ಗಂಗಾತೀರದ ಆರಣ್ಯ. ಸೀತಾದೇವಿ ಗರ್ಭಿಣಿಯಾದರೂ ಸಡಗರದಿಂದ ಬೇಗನೆ ನಡೆದು ಬರುತ್ತಾಳೆ. ಆಯಾಸವಾದರೂ ಉತ್ಸಾಹ ಭರದಲ್ಲಿ ಆಕೆಗೆ ಅದು ತಿಳಿಯುವುದಿಲ್ಲ.]

ಸೀತೆ— ಸೌಮಿತ್ರಿ,
ಈ ಬನದ ಪಸುರ್ಗತ್ತಲೆ ಕಣ್ಗೆನಿತು ತಣ್ಣಗಿದೆ!
ಬಾನ ನಡುನೆತ್ತಿಯೊಳು
ನಡುವಗಲ ನೇಸರು ನಿಶ್ಚಲಂ ಪೊಳೆದಿರ್ದೊಡಂ
ಬಿಸಿಲ ಕಾಯ್ಪಿಲ್ಲಿ ತೋರದಿದೆ.
ಈ ಹೆಮ್ಮರಗಳೇಂ
ತಳಿರ್ಗೊಡೆವಿಡಿದು ನಿಂದಿಹವು
ನಮಗೆ ನೆಳಲೀಯಲೆಂಬಂತೆ!—
ಅಲ್ಲಿ ನೋಡಯ್!—ತನ್ನ ನೀರೆದೆಯೊಳು
ತೆರೆ ತೆರೆಗೆ ಪರ್ಬಿ ಮಾರ್ಪೊಳೆದು ಮಿಂಚುತಿಹ
ರವಿಯ ಬಿಂಬವುಂ ಪೊತ್ತು
ತುಂಬು ಬಸಿರಿಂ
ಇಕ್ಕೆಲದ ಬನಸಿರಿಯ ನಡುವೆ ಮೆಲ್ಲಮೆಲ್ಲನೆ ಪರಿವ
ಗಂಗೆಯೇಂ ಕಣ್ಗೆಡ್ಡವಾಗಿಹಳು!
ಆಹ!—
ಮುಂಗಾಲ್ಗಳಂ ನೆಲದೊಳೂರಿ ಪಿಂಗಾಲ್ಗಳಿಂ ನಿಂತು
ಮೋರೆಯುಂ ನೀರ್‌ಗಿಟ್ಟು ನೀರ್ ಕುಡಿವ
ಆ ಹರಿಣಿಯೇಂ ಚೆಲ್ವಂ ಮೆರೆದಪುದು!
ಅದರೆಡೆಯೊಳಿಹ ಮರಿಯೇಂ ಬಾಲವನೊಲೆದು ಚಿಮ್ಮುತಿದೆ!
[ಹಿಂತಿರುಗಿ ನೋಡಿ ಲಕ್ಷ್ಮಣನು ದೂರದಲ್ಲಿ ಬರುತ್ತಿರುವುದನ್ನು ಕಂಡು]
ಅಯ್ಯೋ, ನಾನಾರೊಡನೆ ನುಡಿಯುತಿಹೆನಿಂತು?—(ಗಟ್ಟಿಯಾಗಿ)
ಇದೇನಯ್, ಸೌಮಿತ್ರಿ, ಹಿಂದುಳಿದೆ?

ಹಾದಿಯೊಳು ಕಲ್ಲು ಮುಳ್ಳುಗಳಿಲ್ಲ;
ತಗ್ಗು ದಿಣ್ಣೆಗಳಿಲ್ಲ;
ಸಮತಟ್ಟಾಗಿರ್ಪುದೀ ಬನಂ.

[ಲಕ್ಷ್ಮಣನು ಬಿಲ್ಲು ಬತ್ತಳಿಕೆಯೊಡನೆ ಬರುತ್ತಾನೆ. ಒಂದು ದೊಡ್ಡ ಗಂಟನ್ನು ಹೊತ್ತಿದ್ದಾನೆ. ಸೀತೆ ಮುಗುಳ್ನಗೆಯಿಂದ]

ಲೇಸಾಯ್ತು! ಕಡು ಲೇಸಾಯ್ತು!
ಹೆಣ್ಣಾದ ನಾನೆ ಸಾಗಿ ಬರೆ,
ಗಂಡುಗಲಿ ನೀನೆ ನಡೆಯಲಾರದಿರೆ, ನಾಣಲ್ತೆ?
ಇರು, ಇರು; ಊರ್ಮಿಳೆಗಿದನೊರೆದಪೆಂ:
ನಿನ್ನಿನಿಯಂ, ನಚ್ಚಿನ ನಿನ್ನಿನಿಯಂ,
ಪೆಣ್ಣೊಡಗೂಡಿ ನಡೆಯಲಾರದೆ
ಬಸವಳಿದು ಪಿಂದಾದಂ ಎಂದು!

ಲಕ್ಷ್ಮಣ— (ಬಹಳ ಪ್ರಯತ್ನದಿಂದ ಮುಗುಳ್ನಗುತ್ತ)
ತಾಯೆ, ಬೇಗದಿಂ ನಡೆದು ಬರುತಿರೆ
ಹಳುವದೊಳಾವುದೊ ಬಲ್ಮಿಗಂ ಕಣ್ಗೆ ಮಿಂಚಿದುದು.
ಅದೇನೆಂದು ನೋಳ್ಪನಿತರೊಳೆ ನೀಂ ಮುಂದಾದಿರಿ.
ಅದಲ್ಲದೆ, ನಿಮ್ಮ ಕರಂಡಂ—(ಅದನ್ನು ನೋಡಿ)
ಬಹುಭಾರಮಾಗಿರ್ಪುದು.—
ಇದರೊಳೇನಿರ್ಪುದೊ ನಾನರಿಯೆಂ!

ಸೀತೆ— (ನಸುನಗುತ್ತ)
ಎಂದಿನಿಂದಾದುದೈ ನಿನಗೀ ಕೋಮಲ ಸ್ವಭಾವಂ?
ವನವಾಸದಂದು ಎಮ್ಮೆಲ್ಲರ ಪೊರೆಯಂ
ನೀನೊರ್ವನೆ ಆಸರುಬೇಸರಿಲ್ಲದೆ ಪೊತ್ತು
ಜಿಂಕೆಯಂದದಿ ಚಿಮ್ಮುತಿರ್ದುದಂ ನಾನೆ ಕಂಡಿರ್ಪೆಂ
ಲಂಕೆಯೊಳಂದು ಯುದ್ಧಕಾಲದೊಳು
ರಕ್ಕಸರೆಸೆದ ಬಲ್ಗುಂಡುಗಳೆಲ್ಲಂ

ಎನ್ನೀ ಕರಂಡಕಿಂ ಲಘುತರವಾಗಿರ್ದುವೇಂ?—

(ಆಲೋಚಿಸಿದಂತೆ)

ಓಹೋ! ಈಗಳರಿತೆಂ!
ಅರಮನೆಯ ವಾಸಂ,
ಮೇಣೂರ್ಮಿಳೆಯ ಲಲಿತ ಸಹವಾಸಂ
ನಿನ್ನನಿಂತುಗೈದಿರ್ಪುದೆ ಸಾಜಂ!

ಲಕ್ಷ್ಮಣ— ಎನ್ನನಣಕಿಸದಿರಿಂ, ತಾಯೆ.
ಕರಂಡದೊಳೇನಿರ್ಪುದೊ ಅದನರಿಯಲೆಂದಾಟಿಸಿ
ಕುತೂಹಲದಿಂ ಕೇಳ್ದೆನಲ್ತೆ!

ಸೀತೆ— ಅದರೊಳೇನಿರ್ಪುದೈ, ಸೌಮಿತ್ರಿ!
ತಪೋವನದ ಋಷಿಗಳ್ಗೆಂದುಂ ಮುನಿಪತ್ನಿಯರ್ಗೆಂದುಂ
ಪರಿಮಳದ್ರವ್ಯಂಗಳಂ ದಿವ್ಯಾಂಬರಂಗಳಂ
ಕೈಗಾಣ್ಕೆಯಾಗಿಟ್ಟಿಹೆಂ.
ಆಶ್ರಮದ ಕಿರುವರೆಯದ ನಲ್ಗುವರರ್ಗೆಂದು
ಒಂದೆರಳ್ಪಗೆಯ ನಲ್ಲುಣಿಸನಿಟ್ಟಿಹೆಂ.
ಮತ್ತೇನೊಂದುಮಿಲ್ಲಂ!—ಆಃ! ಮರೆತಿರ್ದೆಂ!
ಎನ್ನಿನಿಯನಡಿಗಳ ಚೆಂಬೊನ್ನ ಪಾವುಗೆಗಳಿಹವಲ್ಲಿ!

(ಲಕ್ಷ್ಮಣನು ಕರಂಡಕ್ಕೆ ನಮಸ್ಕಾರ ಮಾಡುತ್ತಾನೆ.)

ನಿನಗದು ಭಾರವಾಗಿರ್ದೊಡೆ ಇತ್ತ ನೀಡು;
ನಾನೆ ಕೊಂಡೊಯ್ವೆಂ!
ಎಂತಾದರುಂ ನೀನೆನ್ನ ಸಮುಕೆ ನಡೆದೊಡೆ
ಅದೆ ನನಗೆ ಸೌಭಾಗ್ಯಂ!—
ಪುರುಷರೆಲ್ಲರ್ಗೆ ಸಮರಮನೆ ಕಾಲ್ಗಳೋಟಂ!
ಮಿಕ್ಕೆಲ್ಲದರೊಳು ನೀಂ ಮಂದಗಾಮಿಗಳೆ ದಿಟಂ! (ಕೈನೀಡೆ)

ಲಕ್ಷ್ಮಣ— ತೆಗೆ ತೆಗೆ, ತಾಯೆ; ಸಾಲ್ಗುಮಾಪರಿಹಾಸ್ಯಂ!
ಭಕ್ತಂಗೆ ದೇವರಡಿದಾವರೆಗಳ್ ಭಾರವೇ?

**ಸೀತೆ—** ಅಂತಾದೊಡೆ ನೀಂ ಪಿಂತುಳಿಯಲಾಗದು.

**ಲಕ್ಷ್ಮಣ—**ಅಪ್ಪುದಪ್ಪುದು, ನಾನಿಂ ಪಿಂತುಳಿಯೆಂ. (ತನ್ನಲ್ಲಿಯೆ)
ಅಯ್ಯೋ, ರಾಘವೇಶ್ವರಂ ಕೋಮಲೆಯ ಕೊಲೆಗೆಲಸಕೆ
ಎಂತೆನ್ನಂ ಬೆಸಸಿದನೊ?
ನಿಷ್ಠುರದೊಳೆಂತೀ ಕೃತ್ಯಮೆಸಗುವೆನೊ?
ಕರುಣೆಯಿಲ್ಲದೀ ಬಾಳು ಪಾಳ್ಪೋಗಲಿ!
ತನ್ನ ಕೀರ್ತಿಯ ಕೋಡಿನೇಳ್ಗೆಗೆಂದು
ನಿರಪರಾಧಿನಿಯುಂ ಬಲಿಗುಡುವರೇ?
ಗೂಬೆ ನಿಂದಿಸಿತೆಂದು ಬೆಳ್ದಿಂಗಳಂ ಪಳಿವರೇ?
ಪಾಳಗಸನೊರ್ವಂ ಮುಳಿಸಿನಿಂ ಮುಂಗಾಣದೆ ಪಳಿದನೆಂದು
ಲೋಕಮಾತೆಯುಂ ಅಡವಿಗಟ್ಟುವುದಾವ ಧರ್ಮಂ? (ನಿಡುಸುಯ್ದು)
ಧರ್ಮದ ಪೆಸರಿನೊಳೆ ಲೋಕದೊಳೆನಿತಧರ್ಮಮಂ ಗೈವರ್!

**ಸೀತೆ—** (ಎರಡು ಹೆಜ್ಜೆ ನಡೆದು)
ಮೈದುನಾ, ನೋಡಲ್ಲಿ: ಪೂತ ಆ ಚೆನ್ನಸುಗೆ
ಸಿಂಗರಿಸಿದ ಮದುಮಗಳಂತೆ ರಂಜಿಸುತ್ತಿದೆ!
ನೋಡು, ಆ ಕೊಂಬೆಯಿಂ ಜೋಲುತಿಹ ಹೆಜ್ಜೇನುಹುಟ್ಟಿ
ಕರ್ದಿಂಗಳ ಫಲಕದಂತೆ
ಎನಿತು ಮನೋಜ್ಞಭೀಷಣಮಾಗಿದೆ!

**ಲಕ್ಷ್ಮಣ—** (ಗಮನಿಸದೆ ತನ್ನೊಳಗೆ)
ಆರೆಂದುದನುಂ ಗಣನೆಗೆ ತಾರದೆ
ತನ್ನ ಚಲಮೇ ನನ್ನಿಯೆಂದು ಸಾಧಿಸಿ
ಎನ್ನನೀ ಕಡುಗೆಯ್ಮೆಗೆ ನೂಂಕಿದಂ.
ಎಂತೀ ಸಿಡಿಲಸುದ್ದಿಯನೊರೆವೆಂ, ಮಾತೆಗೆ?
ಅಯ್ಯೋ ವಿಧಿಯೇ,
ಲಂಕೆಯೊಳೆನ್ನಂ ಕೊಲ್ಲದೆ ಸೀನಿದಕೆಂದೆ ಉಳುಹಿದೆಯಾ?
ಪದಿನಾಲ್ಕು ಬರಿಸಮುಂ ನಾನಾರಾ

ಜಗನ್ಮಾತೆ ಎಂದರಿತು ಸೇವೆಗೈದೆನೋ
ಆ ಪುಣ್ಯಜನನಿಯಂ
ಇಂದೆಂತು ನಟ್ಟಡವಿಯೊಳಿಟ್ಟು ಪೋಗಲಿ?

ಸೀತೆ — (ಹಿಂತಿರುಗಿ)
ಇದೇನೈ, ಸೌಮಿತ್ರಿ, ನಿನ್ನೀ ತೆರಂ?
ನಡೆಯುಲೊಲ್ಲೆ ; ನುಡಿಸಿದರುಂ ನುಡಿಯುಲೊಲ್ಲೆ.
ನುಡಿದರುಂ ಹುಂಕಾರಮೆ ಪಡಿನುಡಿಯಾಗಿರ್ಪುದು!
ಎನ್ನೊಡನೈತರಲು ನಿನಗಿಚ್ಛೆಯಿಲ್ಲೇಂ? (ನಸುಮುನಿಸಿನಿಂದ)
ಅರಮನೆಯೊಳ್ ನೀನಿಂತಾಡಿರ್ದಡೆ
ಭರತ ಶತ್ರುಘ್ನರೊಳಾರಾನುಮಂ ಕರೆತರುತಿರ್ದೆಂ.
ನಡುಗಾಡಿನೊಳು ನಿನ್ನಿಂತೆಸಪಂ ತರವಲ್ತು!

ಲಕ್ಷ್ಮಣ — (ಹನಿಗಣ್ಣಾಗಿ) ಜನನೀ, ಕೋಪಿಸದಿರಿಂ!

ಸೀತೆ — (ಕರುಣದಿಂದ ಕರಗಿ)
ಏನೈ ಕಂದಾ, ಕಣ್ಣು ಹನಿಯೂಡುತಿದೆ!
ನಿನ್ನಿರವಿಂದೇಕೊ ಸೋಜಿಗಮಾಗಿರ್ಪುದು!

ಲಕ್ಷ್ಮಣ — (ಸುತ್ತ ನೋಡಿ)
ದುಂಬಿಗಳಾಟದಿಂ ಕೆದರ್ದ ಪೂಗಳ ಪರಾಗಂ
ಕಣ್ಗೆ ಬಿಳ್ದುದು. (ಕಣ್ಣುಜ್ಜಿಕೊಳ್ಳುತ್ತ)
ಬಟ್ಟೆದಪ್ಪಿದೆನೊ ಏನೋ ಎಂದು ಕಳವಳಂ!

ಸೀತೆ — (ಸಮ್ಮತಿಸಿ)
ಅಹುದಹುದು, ಸೌಮಿತ್ರಿ.
ಎನಗಾಗಳೆಯೆ ಸಂಶಯಂ ತಲೆದೋರ್ದುದು.
ಆದೊಡಂ ನೀಂ ಬಸಬಟ್ಟೆಯುರಿತವಂ ಎಂದು
ಮಾತಾಡದೆಯೆ ಮುಂದುವರಿದೆಂ.—
ಈ ಕಾಡು ಅಟನಕಸದಳವಾಗಿರ್ಪುದು.—
ಪುಣ್ಯಾಶ್ರಮದ ಜಟಿಗಳಂ ಕಾಣೆಂ;

ವಲ್ಕಲವನುಟ್ಟ ಮುನಿವಧುಗಳ ಸುಳಿವಿಲ್ಲ ;
ವಟುಗಳೊರ್ವರುಂ ಕಾಣಿಸರು ;
ಶ್ರುತಿಘೋಷಂ ಕೇಳಿಸದು ;
ಗಾಳಿಯೊಳೆಲ್ಲಿ ಹೋಮ ಧೂಮಂ ಗೋಚರಿಸದು !—
ನಾನಂದು ಕಂಡ ಮುನಿಪೋತ್ತಮರ ವನದೆಡೆಗಳೆಲ್ಲಿ ?
ಸಿದ್ಧಾಶ್ರಮಂಗಳ ಮಂಗಳ ಸ್ಥಳಗಳೆಲ್ಲಿ ?
ಸುಹವಿಗಳ ಕಂಪೊಗೆದು ಪೊಗೆಯೆಲ್ಲಿ
ಆ ಚೆಲ್ವಿನೆಲೆವನೆಗಳ ಸುಳಿವೆಲ್ಲಿ ?
ಎನಗಂದು ಪರಿಚಿತಮಾದ ವಾದವೇದಧ್ವನಿಗಳೊಂದುಂ
ಈ ಎಡೆಯೊಳೆಲ್ಲಿಯುಂ ಕೇಳಿಸದು !
ಅಯ್ಯೋ
ದಾರುಣದ ಕಟ್ಟಡವಿಗಿಲ್ಲಿಗೇಕೈತಂದೆ,
ತಂದೆ, ಸೌಮಿತ್ರಿ ?

ಲಕ್ಷ್ಮಣ — (ತೋರುತ)

ತಾಯೆ, ಈ ದೆಸೆಯೊಳೇನಾದರುಂ
ದಾರಿಯ ಕುರುಪು ತೋರ್ಪುದೋ, ನೋಳ್ಪಂ, ಬನ್ನಿಂ.

(ಸ್ವಲ್ಪ ದೂರ ಹೋಗಿ ತನ್ನಲ್ಲಿಯೆ)

ಅಯ್ಯೋ ಆನೀಗಳೇಗೈವೆಂ ?
ಎಂತುಸಿರ್ವೆಂ ಆ ನಿಷ್ಠುರದ ವಿಷವಾರ್ತೆಯಂ ?
ಇನ್ನೆನಿತು ಪೊಳ್ತು ಈ ಗರ್ಭಿಣಿಯಾದೆನ್ನ ಮಾತೆಯಂ
ಪುಸಿವೇಳ್ದು ಸುತ್ತಿಸಲಿ !
ಹಾ ವಿಧಿ ; ಹಾ ರಾಮಚಂದ್ರಾ !

ಸೀತೆ — (ಬೆಚ್ಚಿ) ರಾಮಚಂದ್ರಾ ! ರಾಮಚಂದ್ರಾ !

ಲಕ್ಷ್ಮಣ — ಏನಾದುದೌ, ತಾಯೆ ?

ಸೀತೆ — ಆಲಿಸು, ಸೌಮಿತ್ರಿ, ಬಳ್ಳೊರಲುತಿದೆ !—
ನೋಡಲ್ಲಿ, ಕುಳ್ಳಿರ್ದ ಮಿಗಮೆದ್ದು ಮಾರ್ಗಮಂ ದಾಂಟುತಿದೆ !—

ಅಯ್ಯೋ, ಎನ್ನ ಬಲದ ಕಣ್ಣದಿರುತಿದೆ!
ದುರ್ನಿಮಿತ್ತಂಗಳಂ ನೋಡಿ ಎನ್ನೆರ್ದೆ ಬೆದರುತಿದೆ!

ಲಕ್ಷ್ಮಣ— (ವ್ಯಸನದಿಂದ) ಬೆದರದಿರಿಂ, ತಾಯೆ.
ಶ್ರೀರಾಮನೆಮ್ಮೆಲ್ಲರಂ ಕಾಪಾಡುವಂ.

ಸೀತೆ— ದಿಟಮದು, ಮೈದುನಾ.
ಎನಗೆನ್ನ ಕೇಡೊಳಳುಕಿಸಿತಿಲ್ಲಂ—
ಶ್ರೀರಾಮಚಂದ್ರಂ ಸೊಗದಿನಿರ್ದಪನೇ?

ಲಕ್ಷ್ಮಣ— ತಾಯೇ, ಸ್ಮರಣೆ!
ಸರ್ವರಕ್ಷಕಂಗೆ ಕೇಡೆಂದರೇನು?
ರಘುಕುಲೇಶಂ ಅರಮನೆಯೊಳಾನಂದದಿಂದಿರ್ಪಂ.

ಸೀತೆ— ಶ್ರೀರಾಮಚಂದ್ರನಾಯುಷ್ಯಂ ಸುದೀರ್ಘಮಕ್ಕೆ!—
ಅಯೋಧ್ಯೆಯ ಜನನಿಕರಕೇನಾದರುಂ
ಅಮಂಗಳಂ ಪ್ರಾಪ್ತಮಾದುದೇ?

ಲಕ್ಷ್ಮಣ— ಅದೆತ್ತಣ ಸಂದೇಹಂ?
ರಾಮನಾಳ್ವಿಕೆಯೊಳಾರ್ಗಂ ಕೇಡಿಲ್ಲಂ;
ಇಂತಿರೆ ಅಯೋಧ್ಯೆಗೆಲ್ಲಿಯ ಅಮಂಗಳಂ?

ಸೀತೆ— ಮೈದುನಾ, ಮತ್ತಾರಿಗೀ ಅಮಂಗಳ ಸೂಚನೆ?

ಲಕ್ಷ್ಮಣ— (ನಿಡುಸುಯ್ದು) ಬಟ್ಟೆಗೆಟ್ಟು ನಿಮ್ಮನೀ ವಿಪಿನಕೊಡಗೊಂಡು
ಬಂದಿರ್ಪೆನಗೆ! (ತಲೆಬಾಗುವನು)

ಸೀತೆ— ಮರುಗದಿರು, ಕಂದಾ.
ಶ್ರೀರಾಮಂಗೆ ನಚ್ಚಿನ ಸಹೋದರಂ ನೀಂ;
ನಿನಗೆಲ್ಲಿಯ ಅಶುಭಂ?—(ಚಿಂತೆಯಿಂದ)
ನಿನಗಲ್ಲವಿೀ ದುಶ್ಶಕುನಂ; ನಿನಗಲ್ಲಂ!—(ದುಃಖದಿಂದ)
ಎನಗೆ! ಹತಭಾಗ್ಯೆಯಾದ ಎನಗೆ!
ಪತಿಪಾದಮಂ ತೊರೆದು ಬನಕೈತಂದೆನಗೆ!
ಅಯ್ಯೋ

ಪಾವನಕೆ ಪಾವನಂ, ಮಂಗಳಕೆ ಮಂಗಳಂ
ಅದಾವನ ಚರಿತ್ರಸಾಮಂಗಳೋ
ಆ ರಾಘವನೆ ಜೀವೇಶನಾಗಿರಲ್ಕೆ
ಆತನಂಘ್ರಿಯನಗಲ್ದು ನಾಂ ಬಂದ ಬಳಿಕ
ಈ ವನದೊಳಿನ್ನು ಪುಣ್ಯಾಶ್ರಮಂ ಗೋಚರಿಪುದೇ?
ತಾವರೆಯನುಳಿದಾರಡಿಗೆ ಬೊಬ್ಬುಳಿಯ ಪೂವಿನೊಳ್
ಮಧುವುಂಟೆ?—ಪೇಳ್ಕೆ, ಸೌಮಿತ್ರಿ. (ಮರುಗುವಳು)

ಲಕ್ಷ್ಮಣ — (ಸ್ವಗತ)
ಅಯ್ಯೋ ಇನ್ನೇನಂ ನಗಳ್ದಪೆಂ?
ಕಠೋರ ಸತ್ಯಮನೆಂತುಸಿರ್ದಪೆಂ?
ಎಂತೀ ಕೋಮಲೆಯಂ ಕೊಲೆಗೆಯ್ವೆಂ?—
ಹಾ ರಾಘವೇಂದ್ರಾ, ಜಗನ್ಮಾರ್ಗದರ್ಶಕಾ ಬಟ್ಟಿದೋರ್ಕೆ!
ಸೀತೆಯಂ,
ಜಗನ್ಮಾತೆಯಂ,
ಸರ್ವಲೋಕಪುನೀತೆಯಂ
ನಾನೆಂತು ಕಾಡುಪಾಲ್ಗೆಯ್ವೆಂ?
ಆವ ಮೊಗದೊಳಯೋಧ್ಯೆಗೆ ಮರಳ್ದಪೆಂ?—
ಅಯ್ಯೋ, ಜನಂಗಳೆಲ್ಲರುಂ ನನ್ನೆಡೆಗೆ ಕೈದೋರಿ,
"ನೋಡಿವನೆ ಸೀತೆಯನಡವಿಯೊಳ್ ಬಿಟ್ಟವಂ;
ತಾಯಂ ಕೊಲೆಗೈದವಂ;
ನಿಷ್ಕರುಣಿ!"
ಎಂದಾಡಿಕೊಂಬುದಂ ಕೇಳ್ದು
ಹರಣವನೆಂತು ಪೊರೆದಪೆಂ?

ಸೀತೆ — ಓ ಲಕ್ಷ್ಮಣಾ,
ನಾನಿನ್ನು ನಡೆಯಲಾರೆನ್ಕೆ. (ತೋರುತ್ತ)
ನೋಡು, ನೋಡಯ್:

ಕಲ್ಲೆಡಹಿ ಮುಳ್ನಾಂಟಿ ಕಾಲಿಂ ಬಸಿವ ನೆತ್ತರಂ!—
ಬಸಿರ ಬೇನೆಯಿಂ ಕಡುನೊಂದೆಂ!
ಅಯ್ಯೋ ಕೆಟ್ಟೆಂ!
ಮುಂತೇನಯ್ ತನಗೆ ಬಟ್ಟೆ?
ಮಾತಾಡಯ್!
ಏಕಿಂತು ಕೆಮ್ಮನಿರ್ದಪೈ?

ಲಕ್ಷ್ಮಣ— (ಬಿಕ್ಕಿ ಬಿಕ್ಕಿ)
ಮಾತೆ,
ಬನಕೆ ಪೋಪೆನೆಂದು ಕಾಂತನನೇತರ್ಕೆ ಬೇಡಿದೌ?
ಎನ್ನನೇತರ್ಕೆ ಇಂತಪ್ಪ ಘೋರಕೇಡುಮಾಡಿದೌ?—
ಹಾ ವಿಧಿ!
ರಾವಣನಿಂ ತಪ್ಪಿಸಿ ಲಕ್ಷ್ಮಣನಿಂ ಕೊಲಿಸಲೆಂದೇ
ರಾಮಾಯಣವನಾಗಿಸಿದಯ್!

ಸೀತೆ— ಮೈದುನಾ, ಏಕೆ ರೋದಿಪಯ್?
ಅಯೋಧ್ಯೆಗೆ ಮರಳುವಂ;
ಪಿಂತಿರುಗು;
ಬಂದ ಬಟ್ಟೆಯೊಳೆ ಪೋಪಂ.

ಲಕ್ಷ್ಮಣ— ಪಿಂತಿರುಗುವುದೆಂತು, ಜನನಿ?

ಸೀತೆ— ಏಕೈ? ಬಂದ ದಾರಿಯಂ ಮರೆತೆಯೇಂ?

ಲಕ್ಷ್ಮಣ— ತಾಯೇ, ನಾನುರುಚಂಡಾಲಂ!

ಸೀತೆ— ಚಿಃ ತೆಗೆ, ಕಂದಾ! ನಿನ್ನನ್ನರ್ಗೆ ತಗದಾತ್ಮನಿಂದೆ!

ಲಕ್ಷ್ಮಣ— ಅಯ್ಯೋ ನೀನರಿಯೈ, ತಾಯೇ.
ನಾನುರುಚಂಡಾಲಂ!
ಮಹಾಪಾಪಿ!
ಮಾತೃಘಾತುಕಂ!

ಸೀತೆ— ಬೇಡ, ಬೇಡ, ಈ ಅಮಂಗಳದ ನುಡಿ!
ರಾಮ, ರಾಮ!
ಸುಮಿತ್ರಾದೇವಿ ಚಿರಾಯುವಕ್ಕೆ!
ಲಕ್ಷ್ಮಣ—ಮಾತೆಯಯೋಧ್ಯೆಯೊಳು ಸುಖದಿನಿರ್ಕೆ!
ಸೀತೆ— ಮತ್ತೇನೈ ನೀನಾಡುವುದು?
ಲಕ್ಷ್ಮಣ—ದೇವೀ, ನಾನಿಲ್ಲಿ ಕೊಲೆಯಾದಪೆಂ;
ನೀಂ ಪಿಂತಿರುಗಿಂ!
ಸೀತೆ— ಇದೇನಯ್, ಸೌಮಿತ್ರಿ?
ನಿನಗೇಂ ಪುರ್ಚೆ?
ಲಕ್ಷ್ಮಣ—ಅಹುದಹುದು, ಪುರ್ಚುರ್ ಪಿಡಿದಿರ್ಪುದು!
ನಿಮ್ಮೊಡನೆ ನಾಂ ಮರಳಲಾರೆಂ!
ಸೀತೆ— ಮತ್ತೆತ್ತಣ್ಗೆ ಪೋದಪ್ಪೈ?
ಲಕ್ಷ್ಮಣ—ನಾನೀ ಎಡೆಯೊಳೆ ಮಡಿವೆಂ ಶಸ್ತ್ರಮಂ ಪಾಯ್ದು!
ಸೀತೆ— ತೆಗೆ ತೆಗೆ! ಎನ್ನಾಣೆ! ಮರಳು, ಪಿಂತಿರುಗು!
ಲಕ್ಷ್ಮಣ—ನಾವೀರ್ವರುಂ ಅಯೋಧ್ಯೆಗೆ ಮರಳಲಾಗದೌ!
ಸೀತೆ— ಅದೇಕೈ?—ಮರೆತೊಡೇಂ?—
ಮರಳಿ ಬಟ್ಟೆಯಂ ನರಸಿ ಪೋಗುವಂ,
ಬಾ, ಕಂದಾ!
ಲಕ್ಷ್ಮಣ—ಅಯ್ಯೋ, ಈ ಪಾಪಿಯುಂ 'ಕಂದಾ' ಎನ್ನದಿರಿ!
ಸೀತೆ— ಕಂದಾ, ಪುರ್ಚಂ ಪಿಡಿಸದಿರೆನಗುಂ!
ಲಕ್ಷ್ಮಣ—(ಗದ್ಗದದಿಂದ)
ನಾನಾಗಲಿ ನೀಮಾಗಲಿ
ಇರ್ವೊರೊಳೊರ್ವರೆಯೆ
ರಾಜಧಾನಿಯಂ ಮರಳಿ ಪುಗವೇಳ್ಕುಂ;
ಸೀತೆ— ಅದೇನೈ?
ಲಕ್ಷ್ಮಣ—ರಾಘವೇಶ್ವರನ ಕಟ್ಟಾಣೆ!

ಸೀತೆ— ಕಂದಾ, ಬೆದರದಿರು.
ನಾನೊರೆದಪೆನೆಲ್ಲಮಂ ರಘುರಾಮಂಗೆ :
ದಟ್ಟಡವಿಯೊಳು ಬಟ್ಟೆದಪ್ಪಿತು ;
ಮರಳ್ದೆವದರಿಂ ಎಂದು.—
ಆರಾದೊಡಂ ಗೈವರೇನಂ ಬಟ್ಟೆದಪ್ಪಿದ ಮೇಲೆ?
ನಿನ್ನದೇಂ ತಪ್ಪು?
ಶ್ರೀರಾಮನಾಗಿರ್ದೊಡಂ ಮರಳ್ದಿರುತಿರ್ದನೇ?
ಲಕ್ಷ್ಮಣ—(ಸುಯ್ದು) ಅಯ್ಯೋ ನಾನದನರಿಯೆಂ!
ನಾನಂತುಂ ಮರಳಲಾರೆಂ ನಿಮ್ಮೊಡನೆ!
ಸೀತೆ— ಮತ್ತೇನಂ ಮಾಡುವೈ? (ನಸು ಸಿಡುಕಿ)
ಎನ್ನನಿಲ್ಲಿಯೆ ಬಿಟ್ಟು ನೀನೊರ್ವನೆ ಪೋಗು!
ಲಕ್ಷ್ಮಣ—ಹಾ ತಾಯೆ, ಶ್ರೀರಾಮನಂತಾಡದಿರಿ!
ಸೀತೆ— ಏನಾಡಿದಂ ರಾಮಚಂದ್ರಂ?
ಪೇಳಯ್!
ಎನ್ನೊಡನೇತರ್ಕಯ್ ಮುಚ್ಚುಮರೆ?
ಲಕ್ಷ್ಮಣ—ಅಯ್ಯೋ, ನಾನೆಂತದನೊರೆವೆಂ
ಆ ಕಠೋರವಾಕ್ಯಮಂ? (ಮರುಗುತ್ತಾನೆ)
ಸೀತೆ— ಪೇಳಯ್, ಸೌಮಿತ್ರಿ; ಎನ್ನಾಣೆ, ಪೇಳಯ್!
ಲಕ್ಷ್ಮಣ—(ತಡೆತಡೆದು ಬಿಕ್ಕಿಬಿಕ್ಕಿ)
ದೇವೀ,
ನಿನಗಿನ್ನೆಗಂ ಪೇಳ್ದುದಿಲ್ಲಂ!—
ಅಪವಾದಮಾವರಿಸೆ, ನಿನ್ನನೊಲ್ಲದೆ,
ರಘುಕುಲೋದ್ವಹಂ ಸೀವರಿಸಿ ಬಿಟ್ಟು
ಕಾಂತಾರಕ್ಕೆ ಕಳುಹಿ ಬಾ ಎಂದೆನಗೆ—
ನೇಮಿಸಿದೊಡೆ—
ಆ ವಿಭುವಿನಾಜ್ಞೆಯಂ ಮೀರಲರಿಯದೆ

ನಿಮ್ಮನೀ ವಿಪಿನಕೊಡಗೊಂಡು ಬಂದೆಂ!—

(ಸೀತೆ ಕಳವಳಗೊಂಡು ನೋಡುತಿರೆ)

ಇನ್ನೊಯ್ಯೊಯ್ಯನಾವಲ್ಲಿಗಾದೊಡಂ ಪೋಗಿಂ!

ಸೀತೆ— ಅಯ್ಯೋ ಕೆಟ್ಟೆಂ! (ಎಂದು ಹಮ್ಮೈಸಿ ಬಿದ್ದು ಮೂರ್ಛೆ ಹೋಗುತ್ತಾಳೆ.)

ಲಕ್ಷ್ಮಣ—ಹಾ ರಾಮ! ಹಾ ರಾಮ!

ಮಾತೆಯುಂ ಪೊರೆಯ್ಕೆ!

ಕರುಣಾಕರ ರಕ್ಷಿಸೈ! (ಸೆರಗಿನಿಂದ ಗಾಳಿ ಬೀಸುತ್ತಾನೆ.)

ಅಯ್ಯೋ

ರಾಮನ ಸೇವೆ ಸಂದುದೇ ಎನಗಿಂದು?

ಇಂದಿಗೆ ಅಯೋಧ್ಯೆಯ ಋಣ ತೀರಿತೇ ಎನಗೆ?—

ಓ ಜಗನ್ಮಾತೆ,

ಹೇ ತ್ರಿಲೋಕಪೂಜಿತೆ,

ಕೊಲೆಗಾರನಂ ಮನ್ನಿಸೌ!

ಕಣ್‌ಬಿಟ್ಟು ನೋಡೌ!—(ಅತಿಶಯ ಶೋಕದಿಂದ)

ಇಲ್ಲದಿರೆ, ಇಲ್ಲದಿರೆ,

ಆನೀಯೆಡೆಯೊಳೆ ಬಾಳ್ಗೊಲೆಯಾದಪೆಂ!

ನಿಶ್ಚಯಂ!

ಸೀತೆ— (ಮೆಲ್ಲನೆ ಕಣ್ದೆರೆದು ದೈನ್ಯದಿಂದ)

ಹಾ ಕಂದಾ! ಲಕ್ಷ್ಮಣಾ! ಅನಾಥೆಯಾದೆನ್ನೈ!—

ರಘುರಾಮನುಂ ಪಿಸುಣ್ಗೆ ಕಿವಿಗೊಟ್ಟು

ಕವಡರಿಯದಬಲೆಯಂ ಬಲಿದೆತ್ತನೇ?—

ಹಾ ಕರುಣಾನಿಧಿ,

ಊರೊಳಗೆ ಮಾರಿಯೆಂದು

ಮನೆವೋರಿಯಂ ಮಾರುಗುಡುವರೇ?—

ಆನಿಲ್ಲದೆಂತು ಅರೆಮೈಯೊಳಿರುವೈ?

ಎಂತು ಪಟ್ಟವಣೆಯನೇರುವೈ ?—
ಹಾ ರಾಘವಾ, ನಿನ್ನಡಿಗಳಾಣೆ!
ಎನ್ನೊಳು ಕೊರತೆಯಿರೆ ಮನ್ನಿಸಿ ಕಾವುದೈ ;
ಕೈಮುಗಿದು ಬೇಡುವೆಂ.—
ಸೌಮಿತ್ರೀ,
ಕೊಯ್ಯಲೊಲ್ಲದೆ ಕೊರಲಂ ಇಂತುಟೆನ್ನಂ ಬಿಡಲು
ಮಾಡಿದಪರಾಧಮುಂಟೇ ?
ಕಯ್ಯಾರೆ ಖಡ್ಗಮಂ ಕೊಟ್ಟು
ತನ್ನರಸಿಯಂ ಹೊಯ್ ಎಂದು ಪೇಳದೆ
ಅಡವಿಗೆ ಕಳುಹಿ ಬಾ ಎಂದನೇ ?—
ಅಯ್ಯಯ್ಯೋ, ರಾಘವಂ ಕಾರುಣ್ಯನಿಧಿಯಲ್ತೆ ?

ಲಕ್ಷ್ಮಣ — ತಾಯೆ, ನಾವೆಲ್ಲರಾಡಿದ ಮಾತಂ ಕಡೆಗೊತ್ತಿ
ತನ್ನ ಪಿಡಿದ ಚಲಮನೆ ಸಾಧಿಸಿ
ಎನ್ನನೀ ಕೆಲಸಕ್ಕೆ ಸೂಂಕಿದಂ.

ಸೀತೆ — ಅಯ್ಯೋ,
ಬಿಟ್ಟನೇ ರಘುಶ್ರೇಷ್ಠನೆನ್ನಂ?
ತಾ ಮುಟ್ಟನೇ ?
ನೆಗಳ್ದ ಬಾಳ್ಕೆಗೆ ಸಂಚಕಾರಮಂ ಕೊಟ್ಟನೇ ?
ಓ ಸುಮಿತ್ರಾತನುಜ,
ಕಟ್ಟರಣ್ಯದೊಳ್ ಕಳುಹಿ ಬಾ ಎಂದು
ಕೊಟ್ಟನೇ ನಿನಗೆ ನಿರೂಪಮಂ?
ಅಯ್ಯೋ, ನನ್ನ ಕಣ್ಬಟ್ಟೆಗೆಟ್ಟನೇ ?
ಇನಿಯನಂ ಅಗಲ್ದು
ಅಡವಿಯೊಳೆಂತು ಪಿಶಾಚದವೊಲಿಹೆನೊ!
ಕೆಟ್ಟೆನೈ !—ಅಯ್ಯೋ ಕೆಟ್ಟೆನೈ !

ಲಕ್ಷ್ಮಣ — ತಾಯೇ............

ಸೀತೆ— ಹಾ ಪ್ರಾಣನಾಥ!
ಅಂದು
ಕೌಶಿಕಮುನಿಪನೊಡನೆ ಮಿಥಿಳಾಪುರಕೆ ಬಂದು
ಇದಕೆಂದೆ ಹರಧನುವಂ ಮುರಿದೆಯಾ?
ಇದಕೆಂದೆ ಎನ್ನಂ ಮದುವೆಯಾದೆಯಾ?—
ನಾನಗಲ್ದೊಡೆ ನವೆಯುತಿರ್ದೆ.—
ಅಯ್ಯೋ ಇದಕಾಗಿಯೇ ಕಪಿವೃಂದಮಂ ನೆರಪಿ
ಕಡಲಂ ಕಟ್ಟಿ ದೈತ್ಯರಂ ಕೊಂದೆಯಾ?
ಅಗ್ನಿಮುಖದೊಳ್ ಪರೀಕ್ಷಿಸಿದೆನ್ನೊಳ್
ಅಪರಾಧಮಂ ಕಾಣಿಸಿದೆಯಾ?
ಲಕ್ಷ್ಮಣ—ತಾಯೇ, ಸೈರಿಸು, ಶ್ರೀ ರಾಮಂ ಕಾವಂ.
ಸೀತೆ— ಕಾವಂ! ಕಾವಂ!
ಓ ಲಕ್ಷ್ಮಣಾ ನೀನಂದು
ಕಲ್ಮುಳ್ಳಿಡಿದ ಕಾಡೊಳೆನ್ನನುಪಚರಿಸಿದೆ;
ಪಲ್ಮಸೆದು ಗರ್ಜಿಪ ವಿರಾಧನಂ ಮರ್ದಿಸಿದೆ;
ಬಲ್ಮೆಯಿಂ ನಾಂ ಕಳುಹಿದೊಡೆ ಜನಸ್ಥಾನದಿಂ
ಪೋದೆ ರಾಘವನ ಬಳಿಗೆ.
ಆ ನಿನ್ನ ನಲ್ಮೆಯಂ ಮರೆದಪನೆ, ಸೌಮಿತ್ರಿ?—
ನೀನೆಲ್ಲರೊಲ್ ಮೈದುನನೆ ಎನಗೆ?
ನಿನಗೆ
ಕಾನನದೊಳೆನ್ನಂ ನಿಲಿಸೆ ಮನಂ ಬಂದುದೇ, ತಂದೇ?
ಲಕ್ಷ್ಮಣ—ಜನನೀ, ಮುಂದೆ ನಾನೇನಂ ಗೈಯಲಿ?
ನೀವೆ ಬೆಸಸಿಂ.
ನಿಮ್ಮಂ ಬಿಟ್ಟು ಪೋಗಲಾರೆಂ;
ಪೋಗದೀಯವಸ್ಥೆಯೊಳಿರ್ದೊಡೆ
ಅಣ್ಣನೇಗೈದಪನೋ? (ರೋದಿಸುತ್ತಾನೆ.)

ಸೀತೆ— ತಂದೆ, ಲಕ್ಷ್ಮಣಾ,
ನಿನ್ನೊಳಾಡಿದೊಡೇನಹುದು ?
ನೀನಂದು ಜನಸ್ಥಾನದಿಂ ಪೋಗಿ
ಎನ್ನಂ ರಕ್ಕಸನಿಗಿತ್ತಂತೆ
ಇಂದುಂ ಕಾಡಿಗೆನ್ನಂ ಕೊಟ್ಟು ಪೋಗು.—
ಅಯ್ಯೋ, ಕೊಂದುಕೊಂಬೆನೇ—
ಈ ಬೆಂದೊಡಲೊಳಿದೆ ಬಸಿರದಂದುಗಂ!
ಕಾಡಿನೊಳ್ ಬಂದುದಂ ಕಾಣ್ಬೆನಾಂ:
ಇದೋ ಕೌಸಲೆಯಡಿಗೆ ವಂದಿಪೆಂ.
ಅಪರಾಧವೊಂದುಮಿಲ್ಲದೆ
ತನ್ನ ಕಂದನೆನ್ನಂ ತೊರೆದುದಂ ದೇವಿಗೊರೆ.

ಲಕ್ಷ್ಮಣ— ಓ ಬನವೇ,
ಎನ್ನಂ ನುಂಗಿಕೊಳಲಾರೆಯೇಂ?
ಓ ಬಾಂದೊರೆಯೇ,
ನೀನೆನ್ನಂ ಮುಳುಗಿಸಲಾರೆಯೇಂ?
ಈ ಪಾಪಿಯನಾರೊಳಕೊಳ್ವರ್ ?
ಓ ಲಕ್ಷ್ಮಣಾ,
ನಿನಗೆ ನರಕದೊಳುಂ ಎಡೆಯಿಲ್ಲ !—
ಮಾಳ್ಕೆಯಿನ್ನಾವುದು ?
ಇಬ್ಬಗಿಯಾಗೀ ಪಾಳೊಡಲಂ ಸೀಳ್ಕಿಡಹಬೇಡವೇ?
ಅಯ್ಯೋ, ಸುಡಲಿ ಈ ನಿಷ್ಠುರದ ಬಾಳ್ಕೆಯಂ !

ಸೀತೆ— ಏಕೆ ನಿಂದಿಹೆ? ಪೋಗು, ಸೌಮಿತ್ರಿ.
ಕೋಪಿಸನೆ ಶ್ರೀರಾಮಚಂದ್ರಂ ನೀನಿಲ್ಲಿ ತಳುವಿದಡೆ?
ಏಕೆನ್ನಂ ನೋಡುತಿಹೆ?
ನೆರವುಂಟು ಎನಗೀ ಕಾಡೊಳುಗ್ರಜಂತುಗಳಲ್ಲಿ !
ಪಾಪ,

ಆ ರಘುನಾಥನೇಕಾಕಿಯಾಗಿರ್ಪನಲ್ತೆ?
ಅಯ್ಯೋ, ಲೋಕದರಸೇಗೈದೊಡಂ
ತನ್ನ ಕಿಂಕರರ್ ಬೇಕು ಬೇಡೆಂದು ಪೇಳರೆ?
ಭರತ ಶತ್ರುಘ್ನರೀ ಕೆಲಸಕೊಪ್ಪಿದರೆ?
ಹನುಮಂತನಿರ್ದಪನೆ ?

ಲಕ್ಷ್ಮಣ—ಭರತ ಶತ್ರುಘ್ನರೊಪ್ಪಿಗೆಯಿಲ್ಲ.
ಹನುಮಂತ ಜಾಂಬವ ಸುಗ್ರೀವರಾರುಂ
ಇದನರಿಯರೌ.

ಸೀತೆ— ಬಿಡು, ಬಿಡು, ಲಕ್ಷ್ಮಣಾ,
ಆರಿರ್ದೊಡೇಗೈವರ್ ?
ಇದು ತನ್ನ ಮರುಳಾಟಂ!—
ಆ ರಾವಣನ ತಮ್ಮನೈಸಲೆ ವಿಭೀಷಣಂ?
ಆತಂ ಭೀರುಗಳನರಿದಪನೆ?
ಸೋದರಂಗುರೆಮುಳಿದ ಸುಗ್ರೀವನೆಂಬುವಂಗೆ
ಕಾರುಣ್ಯಮಿರ್ದಪುದೆ?
ಮತ್ತುಳಿದ ಮಂತ್ರಿಗಳದಾರುಂಟು
ದೇವಂಗೆ ಪೇಳುವರ್ ?
ನೀನೆ
ಒಪ್ಪಿ ಘೋರಾಟವಿಗೆ ಕೊಂಡುಬಂದೆ!
ಇನ್ನೊರಲ್ದೊಡೇನಹುದು ?

ಲಕ್ಷ್ಮಣ—(ಕಿವಿಮುಚ್ಚಿ ಶೋಕಿಸಿ)
ಮಾತೆ,
ಓ ಎನ್ನ ಮಾತೆ,
ಓ ಜಗನ್ಮಾತೆ,
ನಿಷ್ಕರುಣಿಯಂ
ಕುಲಘಾತುಕನಂ

ದುಷ್ಟನಂ
ಚಂಡಾಲನಂ ಉದ್ಧರಿಸೌ! (ಧೊಪ್ಪನೆ ಕೆಡೆದು ನಮಿಸುತ್ತಾನೆ.)
ಸೀತೆ— (ಸಂತೈಸಿ ಎತ್ತಿ)
ಏಳೇಳು, ಕಂದಾ!
ಕೈಹಿಡಿದ ನಲ್ಲನೇ ಪೇಸಿ ಬಿಸುಟ್ಟರೆ
ಇನ್ನಾರೇನು ಮಾಡುವರು?
ನಿನ್ನೊಳೇನಪರಾಧಂ?—
ಕರುಣಾಳು ರಾಘವನೊಳುಂ ತಪ್ಪಿಲ್ಲ!
ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲಂ,
ಈ ಪಾಳೊಡಲಂ, ಪೊರೆವುದೆನ್ನಪರಾಧಂ!
ನೀನಿರಲ್ ಬೇಡ, ನಡೆ, ಪೋಗು;
ನಿಲ್ಲದಿರ್!
ನಿನ್ನಣ್ಣಂ ಕೇಳ್ದೊಡೆ
"ನಿನ್ನಾಣತಿಗಬಲೆ ಮರುಗಿದಳಿಲ್ಲ;
ಮಾರ್ನುಡಿದಳಿಲ್ಲ;
ಮುನಿಸಾಂತಳಿಲ್ಲ;
ಬೆಚ್ಚಿದಳಿಲ್ಲ!
ನೀನೆ ಗತಿಯೆಂದು ನಿನ್ನಡಿಯಂ ನೆನೆಯುತೆ
ಕಡೆವೊಳ್ತಂ ಪಾರುತಿರ್ಪಳ್"
ಎಂನು ಬಿನ್ನವಿಸಯ್!
ಅತ್ತೆವಿರ್ಗಿಂತೊರೆ:
ನಿಮ್ಮಾಶೀರ್ವಾದಮಂ ಪಡೆಯದೆ ಬಂದುದರಿಂ
ಎನಗೀಗತಿಯಾದುದು ಎಂದು.
ಊರ್ವರ್ಗಳಿಗೆ ಪೇಳಿಂತು:
ನಿಮ್ಮೊಳಾಲೋಚಿಸದೆ ಬಂದ ತಪ್ಪಂ ಮನ್ನಿಸಿ,
ಎನ್ನನಾವಗಂ ಮರೆಯಲಾಗದು ಎಂದು!—
ಎನ್ನುಡುಗೆ ತೊಡುಗೆಯಂ ದಾಸಿಯರ್ಗೆ ಪಚ್ಚುಗುಡಯ್!

ನಿನಗೆನ್ನೊಳ್ ದಯೆಯಿರ್ಪೊಡೆ
ಲೋಗರನುವಿಂಗೊಂದು ದಮ್ಮಾಣಿಯನೇರ್ಪಡಿಸಯ್!
ಎನಗೆ ಬಳುವಳಿ ಬಂದಾವಿನ
ತಬ್ಬಲಿ ಎಳಗರುವಂ
ಬಡವಾಗದಂತೆ ನೋಡಿಕೊಳ್ವುದೆಂದು
ನಿನ್ನಿನಿಯಳ್ಗೆ ಪೇಳಯ್!
ಊರ್ಮಿಳೆಗೆ ಕಿರುಗೂಸೊಂದು ಪುಟ್ಟಿದಂದು
ಅದಕ್ಕೆನ್ನಾಶೀರ್ವಾದಮಿರಲಿ! (ಲಕ್ಷ್ಮಣ ನೋಯುತ್ತಾನೆ.)
ನೀನಿನ್ನು ಹೊರಡು;
ನಿನಗೆ ಮಾರ್ಗದೊಳಾಗಲಡಿಗಡಿಗೆ ಸುಖಂ!
ಪಯಣಂ ಸೊಗಮಕ್ಕೆ!
ಶ್ರೀರಾಮನಡಿದಾವರೆಯೊಲ್ಮೆಯೊಂದು ವಜ್ರಪಂಜರಮಕ್ಕೆ!

ಲಕ್ಷ್ಮಣ— (ಕೈಮುಗಿದುಕೊಂಡು)
ಎಲೆ ವನಸ್ಥಳಗಳಿರ, ವೃಕ್ಷಂಗಳಿರ, ಮೃಗಂಗಳಿರಾ,
ಕ್ರಿಮಿಕೀಟಂಗಳಿರ, ಲತೆಗಳಿರಾ,
ಪಂಚಭೂತಂಗಳಿರ, ದೆಸೆಗಳಿರಾ ಕಾವುದು!
ಎಲೆ ಧರ್ಮದೇವತೆಯೆ,
ಜಗಜ್ಜನನಿ ಜಾಹ್ನವಿಯೆ
ಎನ್ನ ಮಾತೆಯುಂ ಜಾನಕಿಯುಂ ಸಲಹಿಕೊಳ್ವುದು!
ಎಲೆ ತಾಯೆ, ಭೂದೇವಿ,
ನಿನ್ನ ಮಗಳಿಹಳು ಸಂರಕ್ಷಿಸೌ!
(ಸೀತೆಯನ್ನು ಬಲವಂದು ತುಸುದೂರ ನಿಲ್ಲುತ್ತಾನೆ.)

ಸೀತೆ— ಏಕೆ ನಿಂತಿಹೆ? ನಡೆ ಸೌಮಿತ್ರಿ!

ಲಕ್ಷ್ಮಣ— ತಾಯೇ, ನಿನ್ನನೆಂತು
ಈ ಘೋರ ವಿಪಿನದೊಳುಳಿದು ಪೋಗಲಿ?
ಶ್ರೀರಾಮನಾಜ್ಞೆಯನೆಂತು ಪಾಲಿಸಲಿ?

ಸೀತೆ— ಮೈದುನಾ,
ರಾಘವನಾಜ್ಞೆಯಂ ಮೀರದಿರು, ನಡೆ.
ಸೀತೆಗಿಂ ರಾಮನಾಣತಿ ಮಿಗಿಲಲ್ತೆ?
ಶ್ರೀರಾಮನಾಜ್ಞೆಯಂ ಪಾಲಿಸಿಹೆ!
ಇಗೋ ಎನ್ನಾಜ್ಞೆಯಂ ಪಾಲಿಸು:
ನಡೆ, ನಿನಗೆನ್ನಾಶೀರ್ವಾದಂ!
[ಲಕ್ಷ್ಮಣನು ಕೈಮುಗಿದು ಮನಸ್ಸಿಲ್ಲದ ಮನಸ್ಸಿನಿಂದ ಹೋಗುತ್ತಾನೆ.]
ಅಯ್ಯೋ,
ಮಿಥಿಲೇಂದ್ರ ವಂಶದೊಳ್ ಜನಿಸಿ
ರಘುಕುಲದ ದಶರಥ ನೃಪನ ಸೊಸೆಯಾಗಿ
ಎನಗೆ ಕಟ್ಟಡವಿಯೊಳ್ ವ್ಯಥಿಸುವಂತಾಯ್ತು?—
ಹಾ ವಿಧಿಯೇ!
ಮರಣಮಂ ತೊರೆದಪೆನೇ
ಬರ್ಪುದು ಭ್ರೂಣಹತ್ಯಾದೋಷಂ!—
ಎನ್ನ ನೋವನಾರ್ಗೊರೆಯುಲಿ?—
ಲೋಕದೈಶ್ವರ್ಯಂ ಸುಖಮೆಲ್ಲಂ ನಶ್ವರಂ!
ಶ್ರೀರಾಮನೊಲ್ಮೆಯೊಂದೆ ಶಾಶ್ವತಂ!
ಆತನ ನಾಮಸ್ಮರಣೆಯೇ ಎನಗೆ ದಿಕ್ಕು:
ಹೇ ಕಲ್ಯಾಣರೂಪ, ನೀನೆನ್ನಂ ಕೈಬಿಡದಿರ್ಕೆ!
ದೆಸೆಗೆಟ್ಟೆನ್ನಂ ಮರೆಯದಿರ್ಕೆ!
ಹೇ ಕರುಣಾಕರ, ಪೆಣ್ಣೆನ್ನೊಳ್ ಕರುಣೆಯಿರಲ್ಕೆ!
ರಾಮಾ! ರಾಮಾ! ರಾಮಾ!............
[ವಾಲ್ಮೀಕಿ ಮಹರ್ಷಿ ಮೆಲ್ಲಮೆಲ್ಲನೆ ಹುಡುಕುನೋಟದಿಂದ
ಆಲಿಸುತ್ತ ಪ್ರವೇಶಿಸುತ್ತಾನೆ.]
ವಾಲ್ಮೀಕಿ— ಮಖಕೆ ಯೂಪವನರಸುತಿರೆ
ಆರ್ತನಾದಂ ಕೇಳ್ವುದಲ್ತೆ?—

ಬನಮೆಲ್ಲಂ ಮರುಗಿದುದು ಆ ನಾದಂಗೇಳ್ದು!
ಎನ್ನೆರ್ದೆಯೊಳುಂ ಚಿಮ್ಮಿದುದು
ಆವುದೋ ಪೊಸತೊಂದಲೌಕಿಕಾವೇಶಂ!—
ಆ ದನಿ
ಸ್ವರ್ಗಮರ್ತ್ಯಂಗಳಂ ವನಗಿರಿಗಳಂ
ಮೇಘಮಂಡಲಮುಮಂ ತುಂಬಿ
ಎನ್ನೆರ್ದೆಯೊಳ್ ಅನುರಣಿತಮಾದುದಲ್ತೆ?—(ಮೆಲ್ಲಗೆ)
ರಾಮಾ! ರಾಮಾ! ರಾಮಾ! ಎಂಬಾ ಸವಿದನಿ!—
ಅದೆನ್ನ ಸಚ್ಚಿನ ಮಹಾಮಂತ್ರಂ!
ವ್ಯಾಧನಾಗಿರ್ದೆನಗೆ ಮಹರ್ಷಿತ್ವಮಂ ಕೃಪೆಗೈದ
ಮಹಾಮಂತ್ರಂ!—(ಮೆಲ್ಲಗೆ)
ರಾಮಾ! ರಾಮಾ! ರಾಮಾ!
ಆ ಎರಡಕ್ಷರಂಗಳೆನಗೆ ಸಂಕ್ಷಿಪ್ತ ಬ್ರಹ್ಮಾಂಡಂ!
ಸೂರ್ಯೋದಯಂ, ಚಂದ್ರೋದಯಂ,
ಹಿಮವತ್ ಪರ್ವತಂ, ವೇದಕಾವ್ಯಂಗಳೆಲ್ಲಂ,
ಗಂಗೆ ಮೊದಲಪ್ಪ ಪುಣ್ಯತೀರ್ಥಂಗಳುಂ,
ಎನ್ನ ಜೀವನದ ಎಲ್ಲ ಅನುಭವಂಗಳುಂ,
ಆ ದಿವ್ಯನಾಮದ ರಸಮಣಿಯ ಹೃದ್ದೇಶದೊಳೆ
ಕಬ್ಬಿಗನ ಬಗೆಯು ಕಬ್ಬದವೋಲಡಗಿರ್ಕುಂ!—
ರಾಮಾ! ರಾಮಾ! ರಾಮಾ! ಎಂದೊರೆದುದಲ್ತೆ?
ಸ್ತ್ರೀವಾಣಿಯಂತಿರ್ದುದು!—(ಆಲೋಚಿಸಿ)
ಎನ್ನ ಶಿಷ್ಯರಾರುಂ ಈ ದಿಕ್ಕಿಗೈತರಲಿಲ್ಲ!

ಸೀತೆ— (ಮೆಲ್ಲಗೆ) ರಾಮಾ! ರಾಮಾ!

ವಾಲ್ಮೀಕಿ—(ಬೆಚ್ಚಿನೋಡಿ)
ಈ ಎಡೆಯೊಳಾರೋ ರೋದಿಸುತಿರ್ಪರ್.—
ಆರೀಕೆ?

ಗ್ರೀಷ್ಮರುತುವಿಂ ನವೆದ ಕಾಂತಾರದಧಿದೇವಿಯಂತಿಹಳ್!
ಆರೋ ನಾಗರಿಕ ಸ್ತ್ರೀ! (ಹತ್ತಿರ ಬರುತ್ತ)
ಎಲೆ ತಾಯಿ, ನೀನಾವಳೌ?
ಕಂಡ ಕುರುಪಾಗಿರ್ಪುದು!
ಅಕಟಾ,
ಈ ಘೋರತರ ಗಹನಕೋರ್ವಳೆ ಎಂತು ಬಂದೆ?

ಸೀತೆ— (ಬೆಚ್ಚಿ)
ಎನ್ನಾಣೆ! ಶ್ರೀರಾಮುನಾಣೆ!
ಪತ್ತೆ ಸಾರದಿರ್, ಸಾರದಿರ್!

ವಾಲ್ಮೀಕಿ—ತಾಯೇ, ಬೆದರಬೇಡ.
ನಾಂ ಅನ್ಯರಲ್ತು: ತವಸಿಗಳ್!
ಈ ಎಡೆಯ ಆಶ್ರಮದೊಳೆ ಇರ್ಪೆವು.

ಸೀತೆ— ಅಯ್ಯೋ ಬಳಿಸಾರದಿರ್.
ರಾವಣನೀ ವೇಷದೊಳೆ ಮುನ್ನಮೊಯ್ದಂ!
ಶ್ರೀರಾಮುನಾಣೆ! ದೂರಸರಿ!

ವಾಲ್ಮೀಕಿ—ದೇವಿ,
ಶ್ರೀರಾಮುಚಂದ್ರಮುನಾಣೆ! ಎನ್ನಾಣೆ!
ನಾಂ ಕವಡುದವಸಿಯಲ್ತು;
ವಾಲ್ಮೀಕಿ ನಾಂ!
ಭೂರಿ ಶೋಕಾರ್ತರಾಗಿರ್ದರಂ ಕಂಡು
ಸುಮ್ಮನೆ ಪೋಪನಲ್ಲ.

ಸೀತೆ— (ಹರ್ಷ ಶೋಕ ಲಜ್ಜೆಗಳಿಂದ)
ಓ ಕವೀಶ್ವರಾ,
ನಾಂ ಜನಕರಾಜಂಗೆ ಮಗಳ್;
ದಶರಥಮಹಾರಾಜಂಗೆ ಸೊಸೆ;
ಶ್ರೀರಾಮುಚಂದ್ರುಂಗೆ ಪಟ್ಟದರಸಿ!

ಲೋಕಾಪವಾದಕೆ ಬೆದರಿ ಅಪರಾಧಿಯಲ್ಲದೆನ್ನಂ
ತರಣಿಕುಲ ಸಂಭವಂ ಬಿಟ್ಟನೆಂದು
ಈ ವನದೊಳಿರಿಸಿ ಪೋದಂ ಸುಮಿತ್ರಾತ್ಮಜಂ!—
ಜೀವಮುಂ ತೊರೆವೆನೆಂಬೆನೆ
ಬಸಿರೊಳಿಹುದಳ್ಕರೆಯು ಪೊರೆ!—
ತಂದೆ, ಎನಗೆ ಬಟ್ಟೆದೋರ್ಕೆ! (ಕೈಮುಗಿಯುತ್ತಾಳೆ.)

ವಾಲ್ಮೀಕಿ — ದೇವಿ, ಬಿಡು ಶೋಕಮುಂ:
ಪುತ್ರಯುಗಮುಂ ಪಡೆವೆ.
ಭಾವಿಸದಿರಿನ್ನು ಸಂದೇಹಮುಂ.—
ಜನಕಂಗೆ ನಾವನ್ಯರಲ್ಲ!
ನಮ್ಮಾಶ್ರಮಕೆ ಬಂದು ನೀಂ ಸುಖದೊಳಿರ್ದೊಡೆ
ಆವಾವ ಬಯಕೆಯುಂಟೆಲ್ಲಮುಂ ಸಲಿಸಿ
ನಿನ್ನಂ ನಾನೋವಿಕೊಂಡಿರ್ಪೆಂ.
ಅಂಜದಿರು, ಬಾ ಎನ್ನೊಡನೆ!

ಸೀತೆ — ತಂದೆ,
ನಿಮ್ಮಂ ನಾಂ ಮೊದಲೆ ಕೇಳಿಬಲ್ಲೆಂ,
ಅರಿಯದೆಯೆ ಸಂದೇಹಪಟ್ಟುದಂ ಮನ್ನಿಸೈ!
(ಬಿದ್ದು ನಮಸ್ಕರಿಸುತ್ತಾಳೆ.)

ವಾಲ್ಮೀಕಿ — (ಮೆಲ್ಲಗೆ ಹಿಡಿದೆತ್ತುತ್ತ)
ತಾಯಿ, ಮೇಲೇಳು.
ನಿನಗೆಲ್ಲಂ ಒಳ್ಳಿತಹುದು.—
ನೀನೆನ್ನ ಮಹಾಕಾವ್ಯದ ನವಿಗಣ್ಣಲ್ತೆ?
ಕಥಾನಾಯಿಕೆಯಲ್ತೆ?
ವಾಲ್ಮೀಕಿಯ ಭಾಗ್ಯಮಲ್ತೆ?

(ತೆರೆ)

1121—37.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು



# ಕನ್ನಡ ಕಾವ್ಯಮಾಲೆ

(ಪ್ರಾರಂಭ: ೧೯೩೬)

---

ಕಥೆ–ಕವನ–ಕಾದಂಬರಿ– ನಾಟಕ–ಪ್ರಬಂಧ– ವಿಮರ್ಶೆ– ಭಾಷಣ– ಜೀವನ ಚರಿತೆ ಇವೇ ಮುಂತಾದ ಬಹುವಿಧದ ಕನ್ನಡ ಗ್ರಂಥಗಳನ್ನು ಅಂದವಾಗಿ ಪ್ರಕಟಿಸಿ ಸಾಧ್ಯವಾದ ಮಟ್ಟಿಗೂ ಸುಲಭ ಬೆಲೆಗೆ ಒದಗಿಸಿ ಕೊಡಬೇಕೆಂಬುದೇ ಈ ಮಾಲೆಯ ಉದ್ದೇಶ.

ಪ್ರತಿ ವರ್ಷ ಕ್ರೌನ್ ಅಷ್ಟಪತ್ರ ಆಕಾರದ ಸುಮಾರು ನೂರು ಪುಟಗಳ ಆರು ಪುಸ್ತಕಗಳು ಮಾಲೆಯಲ್ಲಿ ಅಚ್ಚಾಗುತ್ತವೆ.

ಪ್ರತಿ ಪುಸ್ತಕದ ಬೆಲೆ ಸಾಮಾನ್ಯವಾಗಿ ಸಾಮಾನ್ಯ ಪ್ರತಿಗೆ ಹನ್ನೆರಡು ಆಣೆಗಳು; ಕ್ಯಾಲಿಕೊ ಪ್ರತಿಗೆ ಒಂದು ರೂಪಾಯಿ ನಾಲ್ಕು ಆಣೆಗಳು.

ಮಾಲೆಯ ಚಂದಾದಾರರಿಗೆ ಮಾತ್ರ ಮಾಲೆಯ ಆಯಾ ವರ್ಷದ ಪ್ರಕಟನೆಗಳನ್ನು ಪೋಸ್ಟಲ್ ಸರ್ಟಿಫಿಕೆಟ್ ಪಡೆದು ಬುಕ್-ಪೋಸ್ಟ್ ಮೂಲಕ ಉಚಿತವಾಗಿ ಕಳುಹಿಸಲಾಗುತ್ತದೆ.

ವರ್ಷದ ಚಂದಾ ಹಣವನ್ನು "ಕಾವ್ಯಾಲಯ"ದ ಆಫೀಸಿಗೆ ಮುಂಗಡವಾಗಿ ಪಾವತಿ ಮಾಡುವವರು ಚಂದಾದಾರರು.

ವಾರ್ಷಿಕ ಚಂದಾ ಅಂಚೆ ವೆಚ್ಚ ಸೇರಿ (i) ಸಾಮಾನ್ಯ ಪ್ರತಿಗಳನ್ನು ಅಪೇಕ್ಷಿಸುವವರಿಗೆ ರೂ. ೪–೦–೦; (ii) ಕ್ಯಾಲಿಕೊ ಪ್ರತಿಗಳನ್ನು ಅಪೇಕ್ಷಿಸುವವರಿಗೆ ರೂ. ೬–೮–೦.

**ಒಟ್ಟಿಗೆ ನೂರು ರೂಪಾಯಿ ಕೊಡುವವರು ಮಾಲೆಯ ಆಜೀವ ಚಂದಾದಾರರು.**

ಇದುವರೆಗೆ ಅಚ್ಚಾಗಿರುವ ಮತ್ತು ಈಗ ಅಚ್ಚಾಗುತ್ತಿರುವ ಗ್ರಂಥಗಳ ವಿವರ ಮುಂದೆ ಕಾಣಿಸಿದೆ.

ಚಂದಾ ಹಣವನ್ನು ಕಳಿಸುವುದಕ್ಕೂ ಹೆಚ್ಚು ವಿಷಯಗಳನ್ನು ತಿಳಿದುಕೊಳ್ಳುವುದಕ್ಕೂ ವಿಳಾಸವನ್ನು ಕೆಳಗೆ ಕೊಟ್ಟಿದೆ.

---

**ಕಾವ್ಯಾಲಯ * ಪ್ರಕಾಶಕರು * ಶಿವಮೊಗ್ಗ**

# ಕನ್ನಡ ಕಾವ್ಯಮಾಲೆಯ ಗ್ರಂಥಗಳು

**೧. ಕಿಂದರಿಜೋಗಿ ಮತ್ತು ಇತರ ಕಥನಕವನಗಳು**

—ಕೆ. ವಿ. ಪುಟ್ಟಪ್ಪ, ಎಂ.ಎ. ಕ್ರೌನ್ ಅ. viii + ೧೦೫ .. ೦–೧೨–೦

ಕ್ಯಾಲಿಕೊ ಪ್ರತಿ .. ೧– ೪–೦

**ವಿಷಯ:** ಬೊಮ್ಮನಹಳ್ಳಿಯ ಕಿಂದರಿಜೋಗಿ–ಕುಮುದಿನಿ–ಜಯಸಿಂಹನ ಕೊನೆಗಾಲ–ತಾನಾಜಿ–ರಕ್ತರಜನಿ–ಡೂಲಿ–ನಾಗಿ–ಮಂಜಣ್ಣ ಹೇಳಿದ ಸ್ಥಳಗತೆ–ಕರಿಸಿದ್ದ–ಮರಸುಬೇಟೆ–ಘಂಟಾಕರ್ಣ.

**೨. ಸಂನ್ಯಾಸಿ ಮತ್ತು ಇತರ ಕಥೆಗಳು**

—ಕೆ. ವಿ. ಪುಟ್ಟಪ್ಪ, ಎಂ.ಎ. ಕ್ರೌನ್ ಅ. x + ೧೧೦ .. ೦–೧೨–೦

ಕ್ಯಾಲಿಕೊ ಪ್ರತಿ .. ೧– ೪–೦

**ವಿಷಯ:** ಸಂನ್ಯಾಸಿ–ಕ್ರಿಸ್ತನಲ್ಲ, ಪಾದ್ರಿಯ ಮಗಳು!–ಈಶ್ವರನೂ ನಕ್ಕಿರಬೇಕು–ಆರಾಣೆ ಮೂರು ಕಾಸು–ಯಾರೂ ಅರಿಯದ ವೀರ–ಹೋಳಿಗೆ ಪ್ರತಿಜ್ಞೆ–ಮಾಯದಮನೆ–ದೆವ್ವದ ಕಾಟ–ಪಾಪ, ಎಳಗರು!

**೩. ಚಿತ್ರಾಂಗದಾ**

—ಕೆ. ವಿ. ಪುಟ್ಟಪ್ಪ, ಎಂ.ಎ. ಕ್ರೌನ್ ಅ. vi + ೯೭ .. ೦–೧೨–೦

ಕ್ಯಾಲಿಕೊ ಪ್ರತಿ .. ೧– ೪–೦

ರವೀಂದ್ರನಾಥ ಠಾಕೂರರ 'ಚಿತ್ರಾ' ಮತ್ತು ಲಕ್ಷ್ಮೀಶನ ಜೈಮಿನಿ ಭಾರತದ 'ಚಿತ್ರಾಂಗದಾ' ಇವುಗಳ ಪ್ರಭಾವದಿಂದ ಮೂಡಿ ಸೃಷ್ಟಿಯಾಗಿರುವ ಸ್ವತಂತ್ರ ಕಲಾಕೃತಿಯೊಂದನ್ನು ವಾಚಕರು ಇದರಲ್ಲಿ ನೋಡಬಹುದಾಗಿದೆ. ಸುಮಾರು ೨,೫೦೦ ಪಂಕ್ತಿಗಳ ಈ ದೀರ್ಘ ಕಾವ್ಯವು ಸಂಪೂರ್ಣವಾಗಿ ಸರಳ ರಗಳೆಯ ಛಂದಸ್ಸಿನಲ್ಲಿದೆ.

**೪–೫. ಕಾನೂರು ಸುಬ್ಬಮ್ಮ ಹೆಗ್ಗಡಿತಿ** (ಸಂಪುಟ ೧–೨)

—ಕೆ. ವಿ. ಪುಟ್ಟಪ್ಪ, ಎಂ.ಎ. ಕ್ರೌನ್ ಅ. viii + ೧೯೬ .. ೧–೮–೦

ಕ್ಯಾಲಿಕೊ ಪ್ರತಿ .. ೨–೮–೦

ಮಲೆನಾಡಿನ ಜೀವನಕ್ಕೆ ಸಂಬಂಧಪಟ್ಟ ಸಾಮಾಜಿಕ ಕಾದಂಬರಿ. ಈ ಗ್ರಂಥವು ಸುಮಾರು ೮೦೦ ಪುಟಗಳಷ್ಟು ವಿಸ್ತಾರವಾಗಿದೆ. ಕನ್ನಡ ಸಾಹಿತ್ಯ ದಲ್ಲಿ ಈಗಿರುವ ಕಾದಂಬರಿಗಳಲ್ಲೆಲ್ಲ ಇದೇ ಅತ್ಯಂತ ದೊಡ್ಡದೆಂದು ಹೇಳಬಹುದಾಗಿದೆ.

**ಕಾನೂರು ಸುಬ್ಬಮ್ಮ ಹೆಗ್ಗಡಿತಿ** (ಭಾಗ ೩) .. .. ೦–೧೨–೦

ಕ್ಯಾಲಿಕೊ ಪ್ರತಿ .. ೧– ೪–೦

---

**ಕಾವ್ಯಾಲಯ * ಪ್ರಕಾಶಕರು * ಶಿವಮೊಗ್ಗ**